


# ಕರ್ನಾಟಕ ವಿಧಾನಪರಿಷತ್ತು

ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

**ಚುಕ್ಕೆ ರಹಿತ ಪ್ರಶ್ನೆ**

ದಿನಾಂಕ : 18-03-2021 ಪ್ರಶ್ನೆ ಸಂಖ್ಯೆ : 1335(1609)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಡಾ|| ವೈ. ಎ. ನಾರಾಯಣಸ್ವಾಮಿ(ಶಿಕ್ಷಕರ ಕ್ಷೇತ್ರ)

ಉತ್ತರ ನೀಡಬೇಕಾದ ದಿನಾಂಕ : 18-03-2021

ಉತ್ತರಿಸುವ ಸಚಿವರು: ಮಾನ್ಯ ಮುಖ್ಯಮಂತ್ರಿಗಳು

ವಿಷಯ : "ಎತ್ತಿನಹೊಳೆ" ಯೋಜನೆ ಬಗ್ಗೆ

(ಅ) ಕೋಲಾರ, ಚಿಕ್ಕಬಳ್ಳಾಪುರ ಜಿಲ್ಲೆಗಳಿಗೆ ಕುಡಿಯುವ ನೀರಿನ ಯೋಜನೆ ಆದ "ಎತ್ತಿನಹೊಳೆ" ಯೋಜನೆ ಪ್ರಾರಂಭ ಆಗಿದ್ದು ಯಾವಾಗಿನಿಂದ; ಯೋಜನೆಯನ್ನು ವಿವರಿಸುವುದು;

(ಆ) ಈ ಯೋಜನೆಗಾಗಿ ಅಂದಾಜು ನಿಗದಿಪಡಿಸಲಾದ ವೆಚ್ಚ ಎಷ್ಟು; ಇದುವರೆವಿಗೂ ಖರ್ಚು ಮಾಡಲಾದ ವೆಚ್ಚ ಎಷ್ಟು;

(ಇ) ಈ ಯೋಜನೆಗಾಗಿ ಅಗತ್ಯವಿರುವ ಭೂಮಿಯನ್ನು ಸ್ವಾಧೀನ ಪಡಿಸಿಕೊಳ್ಳಲಾಗಿದೆಯೇ; ಪಡೆದುಕೊಂಡಿದ್ದರೆ ವಿವರ ನೀಡುವುದು;

(ಈ) ಈ ಯೋಜನೆಯ ಭಾಗವಾದ "ಭೈರಗೊಂಡ್ಲು" ಜಲಾಶಯದ ನಿರ್ಮಾಣಕ್ಕಾಗಿ ಅಗತ್ಯವಿರುವ ಜಮೀನು ಖರೀದಿಸಲಾಗಿದೆಯೇ; ಇದೂವರೆವಿಗೂ ಸ್ವಾಧೀನ ಪಡಿಸಿಕೊಂಡಿರುವ ಜಮೀನು ಎಷ್ಟು; ಈ ಜಮೀನಿಗಾಗಿ ಸರ್ಕಾರ ನಿಗದಿಪಡಿಸಿರುವ ದರ ಎಷ್ಟು;

(ಉ) ಮೇಲ್ಕಂಡ "ಭೈರಗೊಂಡ್ಲು" ಜಲಾಶಯದ ಕಾಮಗಾರಿಯನ್ನು ಯಾವಾಗಿನಿಂದ ಪ್ರಾರಂಭಿಸಲಾಗುವುದು?